.

**ಸಂಭಾಷಣೆ ಹೇಗೆ ಶುರುವಾಗಬೇಕು ? ಪರಿಸರದ ತರಗತಿಯ ಕೆಲವು ಅನುಭವಗಳು**

**ಮಹಮೂದ್ ಖಾನರ ಈ ಲೇಖನ ತರಗತಿಯಲ್ಲಿ ನಡೆಯಬೇಕಾದ ಸಂಭಾಷಣೆಯ ಮಹತ್ವದ ಬಗ್ಗೆ ಇದೆ. ಅವರು ತಮ್ಮ ಪರಿಸರದ ತರಗತಿಯ ಅನುಭವವನ್ನು ಹಂಚಿಕೊಳ್ಳುತ್ತಾ ತರಗತಿಯಲ್ಲಿ ಮಕ್ಕಳಿಗೆ ಕಲಿಕೆಯಲ್ಲಿ ಸಂಭಾಷಣೆ ಹೇಗೆ ಸಹಾಯವಾಗುತ್ತದೆ ಎಂಬುದನ್ನು ಹೇಳುತ್ತಾರೆ. ಈ ಲೇಖನವು ಸಾಕ್ರೆಟೀಸನ ಉದಾಹರಣೆಯೊಂದಿಗೆ ಸಂವಾದ ಎಂದರೇನು? ಇದರ ರೀತಿ ಹೇಗಿರಬೇಕು? ಪ್ರಶ್ನೆ ಹೇಗಿರಬೇಕು? ಯಾವುದನ್ನು ವಿಮರ್ಶಿಸಬೇಕು ಯಾವುದನ್ನು ಬಿಡಬೇಕು? ಶಿಕ್ಷಕನ ತಯಾರಿ ಹೇಗಿರಬೇಕು? ಶಿಕ್ಷಕನ ಪಾತ್ರವೇನು ಮತ್ತು ಇದರಲ್ಲಿ ಮಕ್ಕಳ ಸ್ಥಾನವೇನು? ಎಂಬುದರ ಬಗ್ಗೆ ಸಂಕ್ಷಿಪ್ತವಾಗಿ ತಿಳಿಸುತ್ತದೆ.**

ನಾನು ಕಳೆದ ಐದಾರು ವರ್ಷಗಳಿಂದ ರಾಜಸ್ಥಾನದ ಸರಕಾರಿ (ಪ್ರಾಥಮಿಕ ಮತ್ತು ಹಿರಿಯ ಪ್ರಾಥಮಿಕ) ಶಾಲೆಗಳಲ್ಲಿ ಶಿಕ್ಷಕರು ಮತ್ತು ಮಕ್ಕಳೊಂದಿಗೆ ಪರಿಸರ ಅಧ್ಯಯನ ವಿಷಯದ ಮೇಲೆ ಕೆಲಸ ಮಾಡುತ್ತಾ ಬಂದಿದ್ದೇನೆ. ಈ ಶಾಲೆಗಳಲ್ಲಿ ಓದುವ ಹೆಚ್ಚಿನ ಮಕ್ಕಳು ಬಡವರು ಮತ್ತು ಕಟ್ಟಡ ನಿರ್ಮಾಣ ಕಾಮಗಾರಿಯ ಕಾರ್ಮಿಕರ ಮಕ್ಕಳು.

ಶಿಕ್ಷಕರು ಹಾಗೂ ಮಕ್ಕಳ ಮಧ್ಯೆ ತರಗತಿಯ ಕೊಠಡಿಯಲ್ಲಿ ಸಾಮಾನ್ಯವಾಗಿ ಸಂಭಾಷಣೆ ಬಹಳ ಕಡಿಮೆ ನಡೆಯುತ್ತವೆ. ncf-೨೦೦೫ರ ಪ್ರಕಾರ ಕಲಿಕೆಗೆ ಮಕ್ಕಳ ಸಮುದಾಯ ಮತ್ತು ಸ್ಥಳೀಯ ವಾತಾವರಣ ಬಹಳ ಮುಖ್ಯವಾಗಿರುತ್ತದೆ. ಇದರಲ್ಲಿ ಜ್ಞಾನಕ್ಕೆ ತನ್ನದೇ ಆದ ಮಹತ್ವ ಮತ್ತು ಪ್ರಯೋಜನವಿರುತ್ತದೆ. ತನ್ನ ಪರಿಸರದ ಜೊತೆಯಲ್ಲೇ ಅಂತರ ಕ್ರಿಯೆಯಲ್ಲಿ(ಸಂವಾದದಲ್ಲಿ) ಪಾಲ್ಗೊಂಡು ಮಗುವು ಜ್ಞಾನವನ್ನು ಪಡೆಯುತ್ತದೆ ಮತ್ತು ಜೀವನದಲ್ಲಿ ಅದರ ಸಾರ್ಥಕತೆಯನ್ನು ಪಡೆಯುತ್ತದೆ. ಆದರೆ ಶಾಲೆಗಳಲ್ಲಿ ಮೊದಲೇ ಸ್ಥಾಪಿತವಾದ ಜ್ಞಾನಕ್ಕೆ ಆದ್ಯತೆ ಕೊಡುವುದರಿಂದ ಮಕ್ಕಳ ಜ್ಞಾನದ ಸೃಜನಶಕ್ತಿ ಮತ್ತು ಪ್ರಕ್ರಿಯೆಯಲ್ಲಿ(=ರೀತಿಯಲ್ಲಿ) ಹೊಸ ವಿಧಾನವನ್ನು ಹುಡುಕುವ ಶಕ್ತಿ ನಶಿಸಿಹೋಗುತ್ತದೆ. ಮಾಹಿತಿ, ತಿಳುವಳಿಕೆ ಹುಟ್ಟುಹಾಕುವುದಕ್ಕಿಂತ ಹೆಚ್ಚು ಮಹತ್ವದ್ದಾಗಿಬಿಡುತ್ತದೆ. ಪಡೆದ ಮಾಹಿತಿಗಳನ್ನು ಯಾಂತ್ರಿಕವಾಗಿ ಗಟ್ಟು ಹೊಡೆಯುವುದು ಮತ್ತು ಪ್ರಶ್ನೆಗಳ ಉತ್ತರವನ್ನು ನೆನಪಿಟ್ಟುಕೊಳ್ಳುವುದಕ್ಕೆ ಹೆಚ್ಚು ಒತ್ತು ಕೊಡಲಾಗುತ್ತದೆಯೇ ಹೊರತು ತಿಳುವಳಿಕೆಯನ್ನು ಹೆಚ್ಚು ಮಾಡುವಲ್ಲಿ ಅಥವಾ ಸಮಸ್ಯೆಯನ್ನು ಪರಿಹರಿಸುವ ಬಗ್ಗೆ ಒತ್ತು ಕೊಡಲಾಗುವುದಿಲ್ಲ.

ಹೀಗಿರುವಾಗ ಮಕ್ಕಳು ಯಾವ ಪರಿಕಲ್ಪನೆಯನ್ನು ಇಟ್ಟುಕೊಂಡು ಬರುತ್ತಾರೆ ಎಂಬುದು ಶಿಕ್ಷಕರಿಗೆ ಗೊತ್ತಾಗುವುದೇ ಇಲ್ಲ. ncf-೨೦೦೫ ರ ಪ್ರಕಾರ ಮಕ್ಕಳು ತಮ್ಮ ಪರಿಸರದಿಂದ ಅನೇಕ ತಿಳುವಳಿಕೆಯನ್ನು ಪಡೆದೇ ಶಾಲೆಗೆ ಬರುತ್ತಾರೆ. ಒಂದೊಮ್ಮೆ ಮಕ್ಕಳಿಗೆ ತಮ್ಮ ಮಾತನ್ನು ಶಿಕ್ಷಕರು ಕೇಳಬಯಸುತ್ತಾರೆ ಎಂಬ (=)ದು ವಿಶ್ವಾಸ ಉಂಟಾದರೆ ಮತ್ತು ತಪ್ಪಾದರೆ ಬೈಯುವುದಿಲ್ಲ ಎಂದು ಗೊತ್ತಾದರೆ ಅವರು ಮುಕ್ತವಾಗಿ ಸಂಭಾಷಿಸುತ್ತಾರೆ. ಅವರಲ್ಲಿರುವ ತಿಳುವಳಿಕೆ ಅರೆಬರೆ ಇರಬಹುದು ಅಥವಾ ತಪ್ಪಾಗಿರುವ ಸಾಧ್ಯತೆಯೂ ಇರುತ್ತದೆ. ಹಾಗಿರುವಾಗ ತರಗತಿಯಲ್ಲಿ ಪರಸ್ಪರ ಮಕ್ಕಳ ಮಧ್ಯೆ ಅಥವಾ ಶಿಕ್ಷಕ ಮತ್ತು ಮಕ್ಕಳ ನಡುವೆ ಸಂವಾದ ನಡೆಸುವ ಸಂಸ್ಕೃತಿ ಹುಟ್ಟುಹಾಕುವಲ್ಲಿ ಶಿಕ್ಷಕರ ಪಾತ್ರ ಇರಬೇಕಾಗುತ್ತದೆ. ಆವಾಗಲೇ ಮಕ್ಕಳು ಪ್ರಶ್ನೆ ಕೇಳುವ, ತನ್ನ ಅಭಿಪ್ರಾಯವನ್ನು ಹೇಳುವ, ಬೇರೆಯವರ ಮಾತನ್ನು ಕೇಳುವ ಮತ್ತು ಪುನಃ ಯೋಚಿಸಿ ಹೊಸ ಅಭಿಪ್ರಾಯ ಕೊಡುವ ನಿಟ್ಟಿನಲ್ಲಿ ಮುನ್ನಡೆಯ ಬಲ್ಲರು. ಒಂದೊಮ್ಮೆ ಈ ಸಂವಾದ ಸಂಸ್ಕೃತಿ ತರಗತಿಯಲ್ಲಿ ಉಂಟಾದರೆ ಮಕ್ಕಳು ಬೇಗ ಕಲಿಯುತ್ತಾರೆ ಮತ್ತು ಸರಿಯಾದ ರೀತಿಯಲ್ಲಿ ಕಲಿಯುತ್ತಾರೆ.ಆದರೆ ಈ ಸಂವಾದ ಸಂಸ್ಕೃತಿ ಯಾವುದಾದರೂ ಶಾಲೆಯಲ್ಲಿ ಇಲ್ಲವಾದರೆ ಮಕ್ಕಳ ಮನಸ್ಸಿನಲ್ಲಿ ಬಹಳಷ್ಟು ದ್ವಂದ್ವ ಹುಟ್ಟಿಕೊಳ್ಳುತ್ತದೆ. ಅಂದರೆ ಯಾವುದು ಸರಿ? ಅವರು ತಮ್ಮ ಕುಟುಂಬ, ಗೆಳೆಯರು ಮತ್ತು ಸುತ್ತಮುತ್ತಲಿಂದ ಕಲಿಯುತ್ತಿದ್ದಾರೆಯೆ ನೆ (ಯ) ಅಥವಾ ಶಿಕ್ಷಕರು ಹೇಳಿದ ಮಾತನ್ನೇ? ಅಂದರೆ ಆ ಮಕ್ಕಳಿಗೆ ತಮ್ಮ ಸ್ವಾನುಭವ ಮತ್ತು

ಸಮಾಜದಿಂದ ಬಂದ ಅನುಭವದ ಮಧ್ಯೆ ಹೊಂದಾಣಿಕೆ ಆಗುವುದಿಲ್ಲ. ಈ ಲೇಖನದಲ್ಲಿ ನಾನು ಸಂವಾದ ಸಂಸ್ಕೃತಿಯ ಬಗ್ಗೆ ವಿಚಾರ ಹಾಗೂ ಅನುಭವವನ್ನು ಹಂಚಿಕೊಳ್ಳುತ್ತಿದ್ದೇನೆ. ಸ್ಥೂಲವಾಗಿ ಎರಡು ಪ್ರಶ್ನೆಗಳ ಬಗ್ಗೆ ಮಾತಾಡುತ್ತೇನೆ

೧. ಶಿಕ್ಷಕನಾಗಿ ಸರಕಾರಿ ಶಾಲೆಗಳಲ್ಲಿ ಸಂವಾದ ಸಂಸ್ಕೃತಿಯನ್ನು ಹೇಗೆ ಹುಟ್ಟುಹಾಕುವುದು?

೨. ಸಂವಾದ ಮಾಡುವಾಗ ಯಾವ ಯಾವ ವಿಷಯದ ಬಗ್ಗೆ ಗಮನಹರಿಸಬೇಕು ?

**ತರಗತಿಯ ಕೊಠಡಿಯಲ್ಲಿ ಸಂವಾದ ಸಂಸ್ಕೃತಿಯ ಆರಂಭ, ಒಂದು ಉದಾಹರಣೆ.**

ಕಳೆದ ವರ್ಷದಿಂದ ಜಯಪುರದ ನಗರ ಬ್ಲಾಕ್ ನ (=ಕ್ನ) ಸ ಸಾಂಗಾನೇರ್ ನಲ್ಲಿರುವ ಸರಕಾರಿ ಶಾಲೆಗಳಿಗೆ ಹೋಗಬೇಕಾಯಿತು. ಈ ಸಂಬಂಧ ತರಗತಿಯ ಕೊಠಡಿಗೆ ಹೋಗಿ ಮಕ್ಕಳ ಜೊತೆ ಮಾತಾಡುವ ಮತ್ತು ಅವರಿಗೆ ಪಾಠ ಮಾಡುವ ಅವಕಾಶ ಸಿಕ್ಕಿತು. ಈ ಅನುಭವಗಳಲ್ಲಿ ಒಂದು ಅನುಭವವನ್ನು ನಿಮ್ಮಲ್ಲಿ ಹಂಚಿಕೊಳ್ಳಬಯಸುತ್ತೇನೆ.

ನನಗೆ ಐದನೇ ತರಗತಿಯ ಮಕ್ಕಳ ಜೊತೆ ಪರಿಸರ ಅಧ್ಯಯನದ ಒಂದು ಪಾಠವಾದ "ಎಲ್ಲೆಲ್ಲಿ ನೀರಿನ ಮೂಲ?" ಎಂಬುದರ ಬಗ್ಗೆ ಚರ್ಚಿಸ .ಬೇಕಿತ್ತು. ತರಗತಿಯೊಳಗೆ ಹೋಗಿ ಮಕ್ಕಳಿಗೆ ನನ್ನ ಹೆಸರನ್ನು ಹೇಳಿದೆ. ನಾನು ಇವತ್ತು ನಿಮಗೆ ಪರಿಸರ ಅಧ್ಯಯನ ಎಂಬ ವಿಷಯದ ಮೇಲೆ ಪಾಠ ಮಾಡಲಿದ್ದೇನೆ ತಯಾರಿದ್ದೀರಾ? ಎಂ ದೆ. ಎಲ್ಲಾ ಮಕ್ಕಳು ಒಟ್ಟಿಗೆ "ಎಸ್ಸರ್" ಎಂದು ಹೇಳಿದರು. ನಾನು ಸೀಮೆಸುಣ್ಣ ಮತ್ತು ಡಸ್ಟರನ್ನು ಕೇಳಿದೆ. ಒಬ್ಬ ಹುಡುಗ ಓಡುತ್ತಾ ಹೋಗಿ ತಂದುಕೊಟ್ಟ. ಚರ್ಚೆ ಶುರು ಮಾಡುವುದಕ್ಕಾಗಿ ನಾನು ಬೋರ್ಡಿನ ಮೇಲೆ "ನೀರು" ಎಂದು ಬರೆದೆ. ಎಲ್ಲ ಮಕ್ಕಳು ಜೋರಾಗಿ "ನೀರು" ಎಂದು ಉಚ್ಚರಿಸಿದರು. ನಾನು ನೀರಿಗೆ ಮತ್ತೇನೇನೆಂದು ಕರೆಯುತ್ತಾರೆ? ಎಂದು ಕೇಳಿದೆ. ಮಕ್ಕಳು "ಜಲ, ವಾಟರ್" ಎಂದು ಉತ್ತರಿಸಿದರು. ನಾನು ಅದನ್ನು ಬೋರ್ಡಿನ ಮೇಲೆ ಬರೆದೆ. ನಾನು ಮತ್ತೆ ಮಕ್ಕಳಿಗೆ ನಮಗೆ ನೀರು ಎಲ್ಲೆಲ್ಲಿ ಕಂಡು ಬರುತ್ತದೆ? ಎಂದು ಪ್ರಶ್ನೆ ಕೇಳಿದೆ. ಒಬ್ಬೊಬ್ಬರಾಗಿ ಹೇಳಬೇಕು ನಾನು ಅದರ ಪಟ್ಟಿಯನ್ನು ಬೋರ್ಡಿನ ಮೇಲೆ ಬರೆಯುತ್ತೇನೆ ಎಂದೆ. ಮಕ್ಕಳು ಹೇಳಿದ ಪ್ರಕಾರ ನಾನು ಪಟ್ಟಿ ತಯಾರಿಸಿದೆ.

ಸೂಚಿಯಲ್ಲಿನ ಪ್ರಕಾರ ಬಾವಿ, ಸಮುದ್ರ, ನದಿ, ಕೆರೆ, ಬೀಸಲಪುರ ಗಂಗಾ, ಹ್ಯಾಂಡ್ ಪಂಪು, ನೀರಿನ ದೊಡ್ಡ ಟ್ಯಾಂಕು, ಹೊಂಡ, ಸಣ್ಣ ಟ್ಯಾಂಕು, ನಲ್ಲಿ, ಬೋರ್ , ಕಲ್ಯಾಣಿ, ತೊರೆ, ಗದ್ದೆ, ಮಳೆಯಿಂದ ರಸ್ತೆಯಲ್ಲಿ ಹರಿಯುವ ನೀರು ಇತ್ಯಾದಿ ವಿಷಯಗಳಿದ್ದವು. ನನಗೆ ಈ ಪಟ್ಟಿಯ ಮುಖಾಂತರ ನೀರಿನ ವಾಸ್ತವಿಕ ಮೂಲದವರೆಗೆ ಮಕ್ಕಳನ್ನು ಕರೆದುಕೊಂಡು ಹೋಗಬೇಕಿತ್ತು. ಆದ್ದರಿಂದ ನಾನು ಪಟ್ಟಿಯಲ್ಲಿ ಬಂದ ವಿಷಯವನ್ನು ಒಂದೊಂದಾಗಿ ಚರ್ಚಿಸಲು ಶುರು ಮಾಡಿದೆ.

**ಸಂಭಾಷಣೆಯ ಮಹತ್ವ**

ತರಗತಿಯಲ್ಲಿ ಸಂಭಾಷಣೆ ಮಾಡುವ ಉದ್ದೇಶವೇನೆಂದರೆ ಪ್ರತಿಯೊಬ್ಬ ಮಗುವು ತನ್ನ ಮಾತು ಅಥವಾ ವಿಚಾರದ ಹಿಂದಿನ ಆಧಾರವನ್ನು ಗುರುತಿಸಲು ಸಾಧ್ಯವಾಗಬೇಕು. ಆ ಆಧಾರವನ್ನು ಬೇರೆಯವರ ದೃಷ್ಟಿಯಿಂದ ಕೂಡ ನೋಡಿ ಅದು ಸರಿಯೋ ಅಥವಾ ಅಲ್ಲವೋ ಎಂಬುದನ್ನು ಪರೀಕ್ಷಿಸಲು ಶಕ್ತನಾಗಬೇಕು. ಬೇರೆಯವರ ವಿಚಾರವನ್ನು ತರ್ಕಬದ್ಧವಾಗಿ ಬಿಡಲು ಸಮರ್ಥನಾಗಬೇಕು. . ಆಗ ಅದರ ಜೊತೆಗಾರ ಅಪೋರಿಯ ಸ್ಥಿತಿಗೆ ತಲುಪಿ ತನ್ನ ಅಭಿಪ್ರಾಯ ಅಥವಾ ವಿಚಾರವನ್ನು ಹೊಸದಾಗಿ ಕಟ್ಟಲು ಶಕ್ತನಾಗಬೇಕು. (ಅಪೋರಿಯ – ತರ್ಕದಲ್ಲಿ ಅಸಂಬದ್ಧತೆಯನ್ನು ಗುರುತಿಸುವುದು). ನಾನು ಕೂಡ ಈ ತರಗತಿಯಲ್ಲಿ ಪಾಠ ಮಾಡುತ್ತಾ ಮಕ್ಕಳಿಗೆ ಸಾಕ್ರೆಟಿಸನ ಸಂಭಾಷಣ ವಿಧಿಯ ಮಾಧ್ಯಮದ ಮುಖಾಂತರ ಅಪೋರಿಯ ಸ್ಥಿತಿಗೆ ತರಲು ಪ್ರಯತ್ನಿಸಿದೆ. .

.

ನಾನು “ಯಾರ್ಯಾರು ಬಾವಿಯನ್ನು ನೋಡಿದ್ದೀರಿ?” ಎಂದು ಕೇಳಿದೆ. ಬಹಳಷ್ಟು ಮಕ್ಕಳು “ನಾವು ನೋಡಿದ್ದೇವೆ” ಎಂದು ಹೇಳಿದರು. ಮತ್ತೆ ನಾನು “ಬಾವಿ ಹೇಗೆ ಕಾಣುತ್ತದೆ?” ಎಂದು ಕೇಳಿದೆ. ಹೆಚ್ಚಿನ ಮಕ್ಕಳು “ಬಾವಿ ಗುಂಡಾಗಿ (= ಉರುಟಾಗಿ) ಮತ್ತು ಆಳವಾಗಿ ಇರುತ್ತದೆ” ಎಂದು ಹೇಳಿದರು. ಆದರೆ ಒಬ್ಬ ಹುಡುಗಿ “ಇಲ್ಲ ಸರ್ ಜಿ, ಬಾವಿ ಚೌಕಾಕಾರವಾಗಿ ಇರುತ್ತದೆ” ಎಂದು ಹೇಳಿದಳು. ಆಗ ಮತ್ತೊಬ್ಬ ಮಗು “ಚೌಕ ಬಾವಿಯನ್ನು ನೀನೆಲ್ಲಿ ನೋಡಿದೆ?” ಎಂದು ಕೇಳಿತು. “ನನ್ನ ಹಳ್ಳಿಯ ಲ್ಲಿ ನನ್ನಮ್ಮ ನೀರು ತರುವ ಬಾವಿ ಹಾಗಿದೆ” ಎಂದು ಹುಡುಗಿ ಹೇಳಿದಳು. ಈಗ ಮಕ್ಕಳು ಯೋಚಿಸಲಾರಂಭಿಸಿದರು. “ನಮ್ಮ ಹಳ್ಳಿಯಲ್ಲಂತೂ ಈ ತರದ ಬಾವಿ ಇಲ್ಲ” ಎಂದು ಹೆಚ್ಚಿನ ಮಕ್ಕಳು ಹೇಳಿದರು. “ನೀನು ಬಾವಿ ಚೌಕ ವಾಗಿದೆಯೋ ಅಥವಾ ಗೋಲ ವಾಗಿದೆಯೋ ಎಂದು ತಿಳಿಯಲು ಬಾವಿಯಲ್ಲಿ ಇಣುಕಿ ನೋಡಿದೆಯಾ?” ಎಂದ ಒಬ್ಬ ಹುಡುಗ. “ಇಲ್ಲ” ಎಂದಳು ಹುಡುಗಿ. “ಹಾಗಾದರೆ ನೀನು ಬಾವಿ ಚೌಕ ವಾಗಿದೆ ಎಂದು ಹೇಗೆ ಹೇಳಿದೆ?”. ಅವಳು ತನ್ನ ತಾಯಿಯ ಜೊತೆಗೆ ಬಾವಿಗೆ ಹೋದಾಗ ಬಾವಿಯ ಬಾಯಿಗೆ ನಾಲ್ಕು ಕಡೆ ಕಲ್ಲಿನ ಕಟ್ಟೆಇತ್ತು ಅಲ್ಲದೆ ನಾಲ್ಕು ಕಡೆಯಿಂದ ಹೆಂಗಸರು ನೀರು ಸೇದುತ್ತಿದ್ದರು ಎಂದು ಹೇಳಿದಳು.

“ನೀರು ತುಂಬಲು ಸುಲಭವಾಗಲಿ ಅಂತ ಬಾವಿಯ ನಾಲ್ಕು ಕಡೆಗೆ ಬ ಕಟ್ಟೆಯನ್ನು ಕಟ್ಟುತ್ತಾರೆ, ಆದರೆ ಬಾವಿ ಒಳಗೆ ಗೋಲವಾಗಿಯೇ ಇರುತ್ತದೆ “ ಎಂದು ಆ ಹುಡುಗ ಹೇಳಿದ. ಮಕ್ಕಳು ತಮ್ಮ ತಮ್ಮೊಳಗೆ ಮಾಡುವ ತರ್ಕ-ವಿತರ್ಕಗಳನ್ನು ಕೇಳಿ ಹೆಚ್ಚಿನ ಬಾವಿಗಳು ಗೋಲ ಇರುತ್ತವೆ ಎಂದು ಹೇಳಿದೆ. ಆದರೆ ಕೆಲ ಗುಡ್ಡಗಾಡಿನಲ್ಲಿ ಕಲ್ಲನ್ನು ಕೊರೆದು ಬಾವಿ ತೋ ಡಿದಾಗ ಅದು ಗೋಲವಾಗಿಯೇ ಇರಬೇಕೆಂದಿಲ್ಲ. ಕ ಎಂದೆ. ಇದಾದ ಮೇಲೆ ಸಮುದ್ರದ ಬಗ್ಗೆ ಮಾತುಕತೆ ಆಯಿತು. ಮಕ್ಕಳಿಗೆ ಸಮುದ್ರದ ಆಕಾರದ ಬಗ್ಗೆ ಯಾವುದೇ ಅಂದಾಜು ಇರಲಿಲ್ಲ. ಕೆಲ ಮಕ್ಕಳು ಸ್ಕೂಲಿನ ಮೈದಾನದ ಎರಡು ಪಟ್ಟು ಇರುತ್ತದೆ ಎಂದರೆ ಕೆಲವರು ಪ್ರತಾಪ ನಗರದ ಕಾಲನಿಯಷ್ಟು ಎಂದರು. ಯಾವ ಮಕ್ಕಳಿಗೆ ಸಮುದ್ರವನ್ನು ನೋಡಿದ ಅನುಭವವೇ ಇಲ್ಲವೋ ಅವರಿಗೆ ಸಮುದ್ರದ ಬಗ್ಗೆ ಹೇಗೆ ತಿಳಿಸಿಕೊಡುವುದು ಎಂದು ನನಗೆ ಸಮಸ್ಯೆಯಾಯಿತು. ನದಿಯ ಬಗ್ಗೆ ಹೆಚ್ಚಿನ ಮಕ್ಕಳು ನದಿ ಅಂಕುಡೊಂಕಾಗಿ ಮತ್ತು ಉದ್ದವಾಗಿ ಹರಿಯುತ್ತದೆ ಎಂದು ಹೇಳಿದರು. ಸ್ವಲ್ಪ ಚರ್ಚಿಸಿದ ನಂತರ ಮಕ್ಕಳು ನದಿ ಮತ್ತು ತೊರೆಯ ಗ್ರಹಿಕೆಯಲ್ಲಿ ವ್ಯತ್ಯಾಸವನ್ನು ( =ಅಂತರವನ್ನು) ಮಾಡಲು ಶಕ್ತರಾಗಿಲ್ಲ ಎಂದು ನನಗೆ ತಿಳಿಯಿತು. ಇದಾದ ನಂತರ ನಾನು ವಿಷಯ ಬದಲಾಯಿಸಿದೆ ಹಾಗೂ ಸೂಚಿಯಲ್ಲಿದ್ದ ವಿಷಯವನ್ನು ಚರ್ಚಿಸುವ ಬದಲು ಮಕ್ಕಳಿಗೆ ಗೊತ್ತಿದ್ದ ಶಬ್ದಗಳ ಗ್ರಹಿಕೆಯ ಬಗ್ಗೆ ( =ಪರಿಕಲ್ಪನೆಯ ಬಗ್ಗೆ) ಚರ್ಚಿಸಬೇಕು ಎಂದು ನಿಶ್ಚಯಿಸಿದೆ.

**ಪರಿಚಿತ ಸಂದರ್ಭ ಮತ್ತು ಅನುಭವದ ಮಹತ್ವ**

ಜಯಪುರದ ಹತ್ತಿರ ತೋಂಕ ಜಿಲ್ಲೆಯಲ್ಲಿ ಬೀಸಲಪುರ ಅಣೆಕಟ್ಟೆ ಕಟ್ಟಿದ್ದಾರೆ. ಇಲ್ಲಿಂದಲೇ ಜಯಪುರ ನಗರದ ಹೆಚ್ಚಿನ ಭಾಗಕ್ಕೆ ನೀರು ಬರುತ್ತದೆ. ಹೆಚ್ಚಿನ ಮಕ್ಕಳಿಗೆ ಬೀಸಲಪುರ ನೀರು ಬರುತ್ತದೆ ಎಂದು ಗೊತ್ತಿತ್ತು. ಆದರೆ ಬೀಸಲಪುರ ಎಂದರೇನು? ನದಿಯೇ, ಸಮುದ್ರವೇ, ಆಣೆಕಟ್ಟೆ, ಬಾವಿಯೇ? ಎಂಬುದು ಯಾರಿಗೂ ತಿಳಿದಿರಲಿಲ್ಲ.

ಅದರ ಆಕಾರದ ಬಗ್ಗೆ ಕೂಡ ಯಾರಿಗೂ ಯಾವುದೇ ರೀತಿಯ ಅಂದಾಜು ಇರಲಿಲ್ಲ. ಬೋರ್ಡಿನ ಮೇಲೆ ಒಂದು ಚಿತ್ರ ಬರೆದು ಸಾಮಾನ್ಯವಾಗಿ ನದಿ, ಕೆರೆ, ಆಣೆಕಟ್ಟೆ ಹೇಗೆ ಕಾಣುತ್ತವೆ ಎಂಬುದನ್ನು ತಿಳಿಸಿಕೊಡುವ ಪ್ರಯತ್ನವನ್ನು ಮಾಡಿದೆ . ಅದಾದ ಮೇಲೆ ಅವರ ಪಠ್ಯಪುಸ್ತಕದಲ್ಲಿರುವ ಚಿತ್ರಗಳ ಸಹಾಯವನ್ನು ತೆಗೆದುಕೊಳ್ಳಲಾಯಿತು. ಇಲ್ಲಿಯ ಹೆಚ್ಚಿನ ಮಕ್ಕಳು ಕಟ್ಟಡ ಕಾರ್ಮಿಕರ ಅಲೆಮಾರಿ ಕುಟುಂಬಗಳ ಮಕ್ಕಳಾಗಿದ್ದರು. ತಂದೆ-ತಾಯಿಯರು ಆಸುಪಾಸಿನಲ್ಲಿ ಕಟ್ಟುತ್ತಿರುವ ದೊಡ್ಡ ದೊಡ್ಡ ಕಟ್ಟಡಗಳಲ್ಲಿ ಕೆಲಸ ಮಾಡುವ ಕೂಲಿ ಕೆಲಸದವರಾಗಿದ್ದರು. ಮಕ್ಕಳಿಗೆ ಕಲ್ಯಾಣಿ, ಬೋರ್ವೆಲ್ ,ಹ್ಯಾಂಡ್ ಪಂಪು, ದೊಡ್ಡ ನೀರಿನ ಟ್ಯಾಂಕು ಮುಂತಾದವುಗಳ ಬಗ್ಗೆ ಒಳ್ಳೆಯ ತಿಳುವಳಿಕೆ ಇತ್ತು. ಎಲ್ಲಕ್ಕಿಂತ ಮೊದಲು ಮಕ್ಕಳಿಗೆ “ಹೌದ್

ಟ್ಯಾಂಕು ಎಂದರೇನು?" ಎಂದು ಕೇಳಿದೆ. ಮಕ್ಕಳು ನಗಲಾರಂಭಿಸಿದರು. ನಾನು ಮತ್ತೊಮ್ಮೆ ಕೇಳಿದೆ "ಹೌದ್ ಎಂದರೇನು?" ಮನೆ ಕಟ್ಟಲು ಶುರು ಮಾಡುವಾಗ ಮೊದಲು ನೀರಿನ ಅವಶ್ಯಕತೆ ೩ x೪ ಅಥವಾ ಐದರ  ಹೊಂಡ ಅಗೆದು ಅದರಲ್ಲಿ ಪ್ಲಾಸ್ಟಿಕ್ ಶೀಟನ್ನು ಹಾಸಿ ನೀರು ತುಂಬುತ್ತಾರೆ. ಅದಕ್ಕೆ 'ಹೌದ್' ಎನ್ನುತ್ತಾರೆ.  ಸ್ಕೂಲಿನ ಹ್ಯಾಂಡ್ ಪಂಪ್ ಕಡೆಗೆ ಕೈ ತೋರಿಸುತ್ತಾ 'ಇದು ನಿಮಗೆ ಗೊತ್ತಿರಬಹುದು, ಇದು ಹ್ಯಾಂಡ್ ಪಂಪ್. ಹ್ಯಾಂಡ್ ಪಂಪ್ ಆಳ ಇದ್ದರೆ ಅದಕ್ಕೆ ತುಂಬಾ  ಹೊತ್ತು ಪಂಪು  ಮಾಡಬೇಕಾಗುತ್ತದೆ, ಆಳ ಕಡಿಮೆ ಇದ್ದರೆ ನೀರು ಬೇಗ ಹೊರಬರುತ್ತದೆ' ಎಂದರು. ನನಗಂತೂ ತುಂಬಾ ಆಶ್ಚರ್ಯವಾಯಿತು. ಮಕ್ಕಳಿಗೆ ಆಳವಾದ ಹ್ಯಾಂಡ್ ಪಂಪಿನಿಂದ ತಡವಾಗಿ ನೀರು ಹೊರಬರುತ್ತದೆ ಆದರೆ ಕಡಿಮೆ ಆಳದ ಹ್ಯಾಂಡ್ ಪಂಪಿನಿಂದ ಬೇಗ ನೀರು ಹೊರಬರುತ್ತದೆ ಎಂಬ ಅನುಭವ ಹೇಗೆ ? ಎಂದು ಕೇಳಿದಾಗ "ಹೆಚ್ಚು ಆಳ ಇದ್ದರೆ ಹೆಚ್ಚು ಹೊತ್ತು ನಡೆಸಬೇಕು, ಆಳ ಕಡಿಮೆಯಿದ್ದರೆ ಕಡಿಮೆ ಹೊತ್ತು ನಡೆಸಬೇಕಾಗುವುದು" ಎಂದು ಉತ್ತರಿಸಿದರು. 'ಸಂಪ್' ಎಂದರೇನು ಅಂತ ಕೇಳಿದೆ. "ಸರ್, ಮನೆಯಲ್ಲಿ ನಳದ ನೀರನ್ನು ಶೇಖರಿಸಿ ಇಡಲು ಒಂದು ಚೌಕಾಕಾರದ ಸಂಪನ್ನು ಮಣ್ಣಿನಡಿಯಲ್ಲಿ ಮಾಡುತ್ತಾರೆ. ಮೋಟಾರಿನಿಂದ ಮೇಲಿನ ಅಂತಸ್ತುಗಳಿಗೆ ನೀರನ್ನು ಹತ್ತಿಸಲಾಗುತ್ತದೆ" ಎಂದು ಹೇಳಿದರು.

ಅವರ ದೈನಂದಿನ ಜೀವನಕ್ಕೆ ಸಂಬಂಧಿಸಿದ, ಅವರಿಗೆ ಪರಿಚಿತವಾದ ಸಂದರ್ಭದ ಬಗ್ಗೆಯೇ ಮಾತನಾಡುತ್ತಾ ನಾನು ಕೇಳಿದೆ.  "ನಿಮ್ಮ ಕುಟುಂಬಕ್ಕೆ ಎಲ್ಲಿಂದ ನೀರು ಬರುತ್ತದೆ?" ಬಾವಿ, ನಲ್ಲಿ, ಟ್ಯೂಬ್ ವೆಲ್, ನದಿ, ಟ್ಯಾಂಕು, ಹ್ಯಾಂಡ್ ಪಂಪು ಮುಂತಾದವು ಗಳಿಂದ ಎಂಬ ಉತ್ತರ ಬಂತು. ನಾನು ಮುಂದಿನ ಪ್ರಶ್ನೆ ಕೇಳಿದೆ. "

ಇವೆಲ್ಲವಕ್ಕೆ ನೀರು ಎಲ್ಲಿಂದ ಬರುತ್ತಿರಬಹುದು?"

ಮಳೆಯಿಂದ ಬರುತ್ತದೆ ಎಂದು ಹೇಳಿದರು.

" ಮಳೆ ಎಲ್ಲಿಂದ ಬರುತ್ತದೆ?" ಎಂದು ನಾನು ಕೇಳಿದೆ.

" ಮೇಲಿನಿಂದ ಬರುತ್ತದೆ "ಎಂದು ಉತ್ತರ ಬಂತು.

" ಮೇಲೆ ಅಂದರೆ ಆಕಾಶದಿಂದ. ಆಕಾಶದಿಂದ ಮಳೆ ಹೇಗೆ ಬರುತ್ತದೆ?"

ಒಂದು ಮಗುವಿನಿಂದ ಉತ್ತರ ಬಂತು "ಮಳೆ ಮೋಡಗಳಿಂದ ಬರುತ್ತದೆ". "ಇಲ್ಲ ಸರ್ ಮಳೆಯನ್ನು ದೇವರು ಸುರಿಸುತ್ತಾನೆ" ಎಂದು ಎರಡು ಮಕ್ಕಳು  ಹೇಳಿದವು. ಶಂಕರ ಭಗವಾನರ  ಜುಟ್ಟಿನಿಂದ ಮಳೆ ಬರುತ್ತದೆ ಎಂದು ಒಂದು ಮಗು ಹೇಳಿತು. ಚರ್ಚೆ ಸ್ವಲ್ಪ ಮುಂದುವರೆಯುತ್ತಿದ್ದಂತೆ ಮೋಡದಿಂದ ಮಳೆ ಆಗುತ್ತದೆ ಎಂದ ಮಗುವು ಕೂಡ ದೇವರು ಮಳೆ ಸುರಿಸುತ್ತಾನೆ ಎಂದು ಹೇಳತೊಡಗಿತ್ತು.

ಮಕ್ಕಳು ಅತ್ಯಂತ ಆತ್ಮವಿಶ್ವಾಸದಿಂದ ಮಾತಾಡಲು ತೊಡಗಿದ್ದವು. ಆದ್ದರಿಂದ ನಾನು ಹೇಳಿದೆ  "ಮಳೆಯನ್ನು ದೇವರೇ ಸುರಿಸುತ್ತಾನೆ ಎಂಬುದನ್ನು ಒಪ್ಪುವ. ಆದರೆ ದೇವರು ಇರುವುದಾದರೂ ಎಲ್ಲಿ?"  "ಪರ್ವತದ ತುದಿಯಲ್ಲಿ"," ಹಿಮಾಲಯದ ಪರ್ವತದಲ್ಲಿ"" ಆಕಾಶದಲ್ಲಿ"" ಬೇರೆ ಜಗತ್ತಿನಲ್ಲಿ " ಎಂಬಂತಹ ಉತ್ತರಗಳು ಬಂದವು. ಆದರೆ ದೇವರು ಹಿಮಾಲಯ ಪರ್ವತದಲ್ಲಿ ಇರುತ್ತಾನೆ ಎನ್ನುವಲ್ಲಿ ಬಹುಮತವಿತ್ತು.

"ಹಾಗಾದರೆ ಯಾವ ದೇಶದಲ್ಲಿ ದೇವರು ಇರುವುದಿಲ್ಲವೋ ಆ ದೇಶದಲ್ಲಿ ಮಳೆ ಹೇಗೆ ಸುರಿಸುತ್ತಾನೆ?" ಎಂಬ ಪ್ರಶ್ನೆ ಕೇಳಿದ ಮೇಲೆ ದೇವರು ಎಲ್ಲ ಕಡೆ ಇರಬಹುದು ಎಂದು ಮಕ್ಕಳು ಹೇಳತೊಡಗಿದರು.  ತರಗತಿಯಲ್ಲಿ ಒಬ್ಬ ಹುಡುಗ ದೇವರು ಎಲ್ಲಾ ಕಡೆ ಇರುತ್ತಾನೆ ಎಂದು ಹೇಳಿದ್ದ. ಆದರೆ ಎಲ್ಲರೂ ಅವನ ಬಾಯಿ ಮುಚ್ಚಿಸಿದ್ದರು. ಈಗ ಆ ಮಗು ಕುಣಿದು ಕುಪ್ಪಳಿಸುತ್ತಾ ದೇವರು ಎಲ್ಲಾ ಕಡೆ ಇದ್ದಾನೆ ಎಂದು ನಾನು ಮೊದಲೇ ಹೇಳಿದ್ದೆ ಎನ್ನತೊಡಗಿದ . ಈಗ ೫ನೇ

ತರಗತಿಯ ಮಕ್ಕಳ ಜೊತೆ ದೇವರು ಇದ್ದಾನೋ ಇಲ್ಲವೋ ಎಂಬ ವಿಷಯವನ್ನು ಎತ್ತಬೇ ಕೋ ಬೇಡವೋ ಎಂಬ ಸಂದಿಗ್ಧಕ್ಕೆ ಬಿದ್ದೆ.

ಮಳೆ ಮೋಡಗಳಿಂದ ಆಗುತ್ತದೆ ಎಂದು ಹೇಗೆ ಸಾಬೀತುಪಡಿಸುವುದು ಎಂಬ ಪ್ರಶ್ನೆ ಎದುರಾಯಿತು. ಈ ಚರ್ಚೆಯಲ್ಲಿ ನಮ್ಮೆಲ್ಲರನ್ನು ದೇವರೇ ಸೃಷ್ಟಿಸಿದ್ದಾನೆ ಮತ್ತು ಪ್ರತಿಯೊಂದು ಜೀವವನ್ನು ದೇವರೇ ಸೃಷ್ಟಿಸಿದ್ದಾನೆ ಎಂಬ ವಿಷಯವೂ ಬಂದಿತ್ತು.

"ದೇವರನ್ನು ಯಾರಾದರೂ ನೋಡಿದ್ದೀರಾ?" ಎಂದು ನಾನು ಕೇಳಿದೆ. ಒಂದು ಮಗು ಹೇಳಿತು "ಹಾಗೆಲ್ಲ ದೇವರು ಕಾಣುವುದಿಲ್ಲ ಅವನ ಬೆಭೆಟ್ಟಿ ಆಗಲು ಸಾಯಬೇಕಾಗುತ್ತದೆ. ಸತ್ತು ಮೇಲಕ್ಕೆ ಹೋದವರು ಮಾತ್ರ ಅವನನ್ನು ಬೆಟ್ಟಿ ಆಗಲು ಸಾಧ್ಯವಾಗುತ್ತದೆ. ನಮ್ಮ ಹಳ್ಳಿಯಲ್ಲಿ ಯಾರಾದರೂ ಸತ್ತರೆ ಅವನು ದೇವರಿಗೆ ಬೇಕಾದವನು, ಅಂದರೆ ದೇವರ ಹತ್ತಿರ ಹೋದ ಎನ್ನುತ್ತಾರೆ". ದೇವರ ಹತ್ತಿರ ಹೋಗಬೇಕು ಎಂದಾದರೆ ದೇವರು ಎಲ್ಲ ಕಡೆ ಇರುತ್ತಾನೆ ಅಂತ ಹೇಗೆ ಹೇಳುವುದು? ಮಕ್ಕಳು ಯೋಚನೆಗೆ ಬಿದ್ದರು. ಸರಿ ಬಿಡಿ ದೇವರ ಚರ್ಚೆಯನ್ನು ನಾವು ಇಲ್ಲಿಗೆ ನಿಲ್ಲಿಸುವ ಎಂದು ನಾನು ಹೇಳಿದೆ. ವಾಸ್ತವವಾಗಿ ನನಗೆ ಹೇಳಬೇಕಾದ ವಿಷಯಕ್ಕೆ ವಾಪಸ್ ಬರಬೇಕಾಗಿತ್ತು ಅದಕ್ಕೆ ಇದನ್ನೆಲ್ಲ ಮಾಡಬೇಕಾಯಿತು.

ಮಾತನ್ನು ಮುಂದುವರೆಸುತ್ತಾ ನಾನು ಹೇಳಿದೆ- ಈಗ ನಾವು ಮಳೆ ಮೋಡಗಳಿಂದ ಬರುತ್ತದೆ ಎಂದಾದರೆ ಮೋಡಗಳು ಎಲ್ಲಿಂದ ಬರುತ್ತವೆ ಅಥವಾ ಹೇಗೆ ಉಂಟಾಗುತ್ತವೆ ಎಂಬ ಚರ್ಚೆ ಮಾಡೋಣ. "ನನಗೆ ಮೋಡ ಹೇಗೆ ಆಗುತ್ತವೆ ಎಂದು ಗೊತ್ತಿದೆ "ಒಂದು ಮಗು ಹೇಳಿತು. "ಜೋರಾಗಿ ಬೆಂಕಿ ಬಿದ್ದರೆ ಅದರ ಹೊಗೆ ಆಕಾಶಕ್ಕೆ ಹೋಗಿ ಮೋಡವಾಗುತ್ತದೆ". ಆಗ ಇನ್ನೊಬ್ಬ ಮಗು ಹೇಳಿತು "ವಿಮಾನದ ಹೊಗೆಯಿಂದಲೂ ಮೋಡಗಳು ಆಗುತ್ತವೆ, ನಾನು ಎಷ್ಟು ಸಾರಿ ವಿಮಾನ ಹಾರುವಾಗ ಅದರ ಹಿಂದೆ ಉದ್ದವಾದ ಹೊಗೆ ಆಗುವುದನ್ನು ನೋಡಿದ್ದೇನೆ". "ಒಂದು ವೇಳೆ ಹೊಗೆಯಿಂದ ಮೋಡ ಆಗುತ್ತದೆ ಎಂದಾದರೆ ಅದರಲ್ಲಿ ನೀರು ಹೇಗೆ ಬರುತ್ತದೆ?" ಎಂದು ಒಬ್ಬ ಹುಡುಗಿ ಕೇಳಿದಳು. ಆಗ ಇಡೀ ತರಗತಿ ನೀರವವಾಗಿತ್ತು. ಎಲ್ಲರೂ ನನ್ನ ಕಡೆ ನೋಡತೊಡಗಿದರು. "ನನಗೇನು ಗೊತ್ತಿಲ್ಲಪ್ಪ ಪುಸ್ತಕ ತೆರೆದು ನೀರಿನ ಬಗ್ಗೆ ಇರುವ ಇದರ ಪಾಠದಲ್ಲಿ ಇದರ ಉತ್ತರ ಇದೆಯಾ ಇಲ್ಲವಾ ಎಂದು ನೋಡುವ "ಎಂದೆ . ಎಲ್ಲಾ ಮಕ್ಕಳು ಕೂಡಲೇ ತಮ್ಮ ತಮ್ಮ ಪುಸ್ತಕದಲ್ಲಿ ನೀರಿನ ಬಗ್ಗೆ ಇರುವ ಪಾಠವನ್ನು ತೆಗೆದು ಓದತೊಡಗಿದರು. ಪಾಠ ಪೂರ್ಣ ಆಗುವ ಮೊದಲೇ ಶಾಲೆಯ ಗಂಟೆ ಹೊಡೆಯಿತು. ನಾನು ಮತ್ತೊಮ್ಮೆ ನಿಮ್ಮ ಶಾಲೆಗೆ ಬರುತ್ತೇನೆ ಅಲ್ಲಿಯವರೆಗೆ ಮೋಡ-ಮಳೆ ಆಗುವುದರ ಕಾರಣಗಳನ್ನು ತಿಳಿದುಕೊಳ್ಳುವ ಪ್ರಯತ್ನವನ್ನು ಮಾಡಿರಿ ಎಂದೆ. ಮುಂದಿನ ಬಾರಿ ತರಗತಿಗೆ ಹೋಗಿ "ಕಳೆದಬಾರಿ ಎಲ್ಲಿವರೆಗೆ ಆಗಿತ್ತು?"

ಎಂದು ಕೇಳಿದೆ. ಮಕ್ಕಳು ನೆನಪಿಸಿಕೊಳ್ಳುತ್ತಾ ಮೋಡ ಹೇಗೆ ಕಟ್ಟುತ್ತದೆ ಮಳೆ ಹೇಗೆ ಬರುತ್ತದೆ ಎಂಬಲ್ಲಿಗೆ ಬಿಟ್ಟು ಹೋಗಿತ್ತು ಎಂದರು.

ಈ ದಿನ ನಾವು ಇದರ ಬಗ್ಗೆ ತಿಳಿದುಕೊಳ್ಳುವ. ಅದಕ್ಕಿಂತ ಮೊದಲು ನಾಲೆ(=ಕಾಲುವೆ) ಮತ್ತು ನದಿಯ ಮಧ್ಯೆ ಇರುವ ಅಂತರವನ್ನು ತಿಳಿದುಕೊಳ್ಳುವ ಎಂದೆ. ಆ ದಿನ ಇದರ ಅಂತರವನ್ನು ಹೇಳಲು ನಿಮ್ಮಿಂದ ಸಾಧ್ಯವಾಗಲಿಲ್ಲ ಎಂದು ನೆನಪಿಸಿದೆ.

ಗಣೇಶ ಎಂಬ ಹುಡುಗ “ನಾಲೆ ಸಣ್ಣಗಿರುತ್ತದೆ ನದಿ ದೊಡ್ಡದಿರುತ್ತದೆ” ಎಂದ. ‘ಕೆಲ ನಾಲೆಗಳು ನದಿಗಿಂತ ದೊಡ್ಡದಿರುತ್ತವೆ’ ಎಂದು ಹೇಳಿದ. ‘ಕೆಲ ನದಿಗಳು ನಾಲೆಗಳಿಗಿಂತ ಸಣ್ಣ ಅಥವಾ ದೊಡ್ಡ ಇರುತ್ತವೆ’ ಎಂದು ಅಸಿಫ್ ಹೇಳಿದ. ಕೆಲವು ನದಿಗಳು ಉದ್ದದಲ್ಲಿ ನಾಲೆಗಳಿಗಿಂತ ಚಿಕ್ಕವು/ ದೊಡ್ಡವಾಗಿರುತ್ತವೆ ಎಂದು ಹೇಳಿದೆ. ‘ನಾಲೆಯ ಸ್ವರೂಪ ಒಂದೇ ತರ ಇರುತ್ತದೆ ಆದರೆ ನದಿ ಅಂಕುಡೊಂಕಾಗಿ ಇರುತ್ತದೆ’ ಎಂದು ಮತ್ತೊಬ್ಬ ಹುಡುಗ ಹೇಳಿದ. “ನದಿ ಮತ್ತು ನಾಲೆಗಳಿಗೆ ನೀರು ಹೇಗೆ ಬರುತ್ತದೆ?” ಎಂದು ಕೇಳಿದೆ. ಮಕ್ಕಳು “ನದಿಗೆ ಮಳೆ ನೀರು ಹಾಗೂ ನಾಲೆಗೆ ಅಣೆಕಟ್ಟೆಯಿಂದ ನೀರು ಬರುತ್ತದೆ” ಎಂದು ಹೇಳಬಹುದು ಎಂದು ಅಪೇಕ್ಷಿಸಿದೆ. ಆದರೆ ನನ್ನ ಅಪೇಕ್ಷೆ ಸುಳ್ಳಾಯಿತು. ಮಕ್ಕಳು ಮಳೆಯಿಂದ ಬರುತ್ತದೆ ಎಂದರು. ನಾನು ಮತ್ತೊಮ್ಮೆ ಕೇಳಿದೆ “ನಿಜವಾಗಿಯೂ ಹೌದಾ?”. ಮಕ್ಕಳು ಯೋಚಿಸತೊಡಗಿದರು. ಆದರೆ ಅವರು ಯಾವುದೇ ನಿರ್ಣಯಕ್ಕೆ ಬರಲಿಲ್ಲ.

ಮುಂದಿನ ಪ್ರಶ್ನೆ ಏನಿತ್ತೆಂದರೆ ನದಿ ಅಂಕುಡೊಂಕಾಗಿ ಇರುತ್ತದೆ. ಆದರೆ ನಾಲೆ ಒಂದೇ ತರ ಇರುತ್ತದೆ ಏಕೆ? ನಾಲೆಯನ್ನು ಕಟ್ಟಿರುತ್ತಾರೆ ಆದರೆ ನದಿ ನೈಸರ್ಗಿಕವಾಗಿ ಇರುತ್ತದೆ ಅದಕ್ಕೆ ಅಂಕುಡೊಂಕಾಗಿ ಇರುತ್ತದೆ ಎಂದಳು ಒಬ್ಬಳು ಹುಡುಗಿ. ‘ನಮ್ಮ ಹಳ್ಳಿಯಲ್ಲಂತೂ ನಾಲೆ ಕಟ್ಟಿದಂತೆ ಇಲ್ಲ ‘ಎಂದು ಗಣೇಶ ಹೇಳಿದ. “ಸರ್ ನದಿ ನೈಸರ್ಗಿಕವಾಗಿ ಇರುತ್ತದೆಯೋ ಅಥವಾ ಕಟ್ಟಿದಂತಿರುತ್ತದೆಯೋ ನೀವೇ ಹೇಳಿ ಸರ್ “ ಎಂದ ಆಸಿಫ್. ಕೆಲ ಮಕ್ಕಳು ಈ ಚರ್ಚೆಯಿಂದ ಪಕ್ಕಾ ಹೊರಬಂದಂತೆ ಕಂಡಿತು. ವಾಸ್ತವವಾಗಿ ಅವರು ನದಿಯನ್ನೂ ನೋಡಿರಲಿಲ್ಲ ನಾಲೆಯನ್ನೂನೋಡಿರಲಿಲ್ಲ.

ನದಿ ಮತ್ತು ನಾಲೆಯ ನಡುವಿನ ವ್ಯತ್ಯಾಸವನ್ನು ಮಕ್ಕಳಿಗೆ ತಿಳಿಸಿ ಹೇಳಬೇಕಾಗಿದ್ದಲ್ಲಿ ನನ್ನ ನ್ನ ಪಾತ್ರವೂ ಇದೆ ಅನಿಸಿತು. ನದಿ ನೈಸರ್ಗಿಕ ವಾಗಿರುತ್ತದೆ. ಭೂಮಿಯ ಏರಿಳಿತದ ಕಾರಣದಿಂದ ಮಳೆಯ ನೀರು ಪರ್ವತ ಪ್ರದೇಶದಿಂದ ವೇಗವಾಗಿ ಹರಿದು ಬಂದು ಭೂಮಿಯನ್ನು ಕೊರೆಯುತ್ತಾ ಮುಂದೆ ಸಾಗುತ್ತದೆ. ಅದಕ್ಕಾಗಿಯೇ ನದಿ ಅಂಕುಡೊಂಕಾಗಿ ಹರಿಯುತ್ತದೆ .ಆದರೆ ನಾಲೆಗಳನ್ನು ಮನುಷ್ಯರು ತಮ್ಮ ಅವಶ್ಯಕತೆಗೆ ಅನುಸಾರವಾಗಿ ನಿರ್ಮಾಣ ಮಾಡುತ್ತಾರೆ. ಹೌದು, ಕೆಲ ನಾಲೆಗಳು ಚೆನ್ನಾಗಿಯೇ ಇರುತ್ತದೆ ಆದರೆ ಕೆಲವು ಚೆನ್ನಾಗಿರುವುದಿಲ್ಲ .ಇದರ ಜೊತೆ ಇನ್ನೊಂದು ಮಾತನ್ನು ಮಕ್ಕಳಿಗೆ ತಿಳಿಸಿಕೊಡಲಾಯಿತು. ಏನೆಂದರೆ ನಾಲೆ ಆಣೆಕಟ್ಟೆಯಿಂದ ಹೊರಡುತ್ತದೆ. ನದಿಗೆ ಅಣೆಕಟ್ಟೆಯನ್ನು ಕಟ್ಟುತ್ತಾರೆ ಅಂದರೆ ನಾಲೆ ಮತ್ತು ನದಿಗಳ ಉಗಮ ಸ್ಥಾನ ಬೇರೆ-ಬೇರೆ ಇರುತ್ತದೆ. ಇಲ್ಲಿ ಆ ಮಕ್ಕಳ ಪಠ್ಯಪುಸ್ತಕದಲ್ಲಿ ಕೊಟ್ಟ ಬಿಸಲಪುರ ಆಣೆಕಟ್ಟೆ ಹಾಗೂ ಅದರಿಂದ ಹೊರಡುವ ನಾಲೆಗಳ ಚಿತ್ರಗಳ ಸಹಾಯವನ್ನು ತೆಗೆದುಕೊಳ್ಳಲಾಯಿತು.

ಇದಾದ ಮೇಲೆ ನಾವೀಗ ಮೋಡ ಮತ್ತು ಮಳೆಯ ಬಗ್ಗೆ ಮಾತಾಡೋಣ. ಹೇಳಿ ಮೋಡಗಳು ಹೇಗೆ ಆಗುತ್ತವೆ? ಎಂದೆ. ಜೋರಾದ ಬಿರುಗಾಳಿಯಿಂದ ದೂಳು ಹಾರಿ ಆಕಾಶಕ್ಕೆ ಹಾರುತ್ತದೆ ಅದು ಮೋಡ ವಾಗುತ್ತದೆ ಎಂದು ಆಸಿಫ್ ಹೇಳಿದ. ಮತ್ತೊಬ್ಬ ಹುಡುಗ ಹೇಳಿದ “ ಧೂಳಿನ ಕಣಗಳ ಜೊತೆ ಸೂರ್ಯನ ಬಿಸಿಲಿನ ತಾಪದಿಂದ ನೀರು ಬಾಷ್ಪವಾಗಿ ಆಕಾಶಕ್ಕೆ ಹೋಗುತ್ತದೆ. ಆಗ ಎರಡು ಸೇರಿ ಮೋಡ ಆಗುತ್ತದೆ. ಧೂಳು, ಮಣ್ಣು, ಹೊಗೆ ಎಲ್ಲಾ ಸೇರಿ ಬಾಷ್ಪದಲ್ಲಿ ಸೇರಿ ಮೋಡವಾಗುತ್ತದೆ .ಮೋಡದಲ್ಲಿ ಹೆಚ್ಚು ನೀರು ಒಟ್ಟಾದಾಗ ಅದರ ಭಾರ ಹೆಚ್ಚುತ್ತದೆ. ಆವಾಗ ಅದು ಮಳೆಯಾಗಿ ಬದಲಾಗುತ್ತದೆ. ಈ ಎಲ್ಲಾ ಚರ್ಚೆ ಆದಮೇಲೆ ‘ಸೀಕ್ರೆಟ್ಸ್ ಆಫ್ ದಿ ಅರ್ಥ್ ‘ ಎಂಬ ಹಿಂದಿ ಡಾಕ್ಯುಮೆಂಟರಿ ಸಿನೆಮಾವನ್ನು ತೋರಿಸುವುದು ಉಚಿತ ಅನಿಸಿತು. ಯಾಕೆಂದರೆ ಸಿನೆಮಾದಲ್ಲಿ ವಿಸ್ತಾರವಾಗಿ ಮೋಡ ಕಟ್ಟುವ ಮತ್ತು ಮಳೆ ಆಗುವುದನ್ನು ತಿಳಿಸಲಾಗಿದೆ.

ಸಿನೆಮಾ ನೋಡುತ್ತಾ ಅವಶ್ಯಕತೆಯಿದ್ದಲ್ಲಿ ಮಧ್ಯಮಧ್ಯ ನಾನು ವಿವರಿಸುವ ಕೆಲಸ ಮಾಡಿದೆ. ಮಕ್ಕಳು ಸಿನೆಮಾವನ್ನು ಬಹಳ ಆಸಕ್ತಿಯಿಂದ ನೋಡಿದರು.

**ಸಂವಾದದ ಅರ್ಥ, ಸಂಭಾಷಣೆಯ ರೀತಿ ಮತ್ತು ಇದರ ನಿಯಮ**

ಸಂವಾದ ದಿನ ನಿತ್ಯದ (ಯಾವುದೇ ವ್ಯಕ್ತಿಯ) ಹರಟೆಯಲ್ಲ ಹಾಗೂ ನಿರುದ್ದೇಶದ ಮಾತುಕತೆಯು ಅಲ್ಲ. ಸಂವಾದ ಎರಡು ಅಥವಾ ಹೆಚ್ಚಿನ ಜನರ ಮಧ್ಯೆ ನಡೆಯುವ ಸಾರ್ಥಕವಾದ ಉದ್ದೇಶಪೂರ್ಣ ಮಾತುಕತೆ. ಅಲ್ಲದೆ ತಾಸು ಎರಡು ತಾಸು ನಡೆಯುವ ಮಾತುಕತೆಯನ್ನು ಸಂವಾದ ಎಂದು ಒಪ್ಪಿಕೊಳ್ಳಲು ಆಗುವುದಿಲ್ಲ. ಹೊರತಾಗಿ ಇದು ನಿರಂತರ ನಡೆಯುವ ಚಿಂತನ ಮನನದ ಪ್ರಕ್ರಿಯೆ.

ಇದರ ಉದ್ದೇಶ ವಾದ-ವಿವಾದ ದಲ್ಲಿ ಯಾರನ್ನಾದರೂ ಸೋಲಿಸುವುದು ಅಲ್ಲ. ನನ್ನ ಹೇಳಿಕೆ ಸರಿಯೋ ಅವರ ಹೇಳಿಕೆ ಸರಿಯೋ ಎಂದು ಕಂಡುಹಿಡಿಯುವುದು ಅಲ್ಲ. ಇದೆಲ್ಲದರ ಹೊರತಾಗಿ ಇಡೀ ಚಿಂತನ ಮನನದ ಉದ್ದೇಶ ಜ್ಞಾನವನ್ನು ಪಡೆಯುವುದು, ಎಲ್ಲರಿಗೂ ಉಪಯೋಗವಾಗುವಂತಹ ಸತ್ಯವನ್ನು ಪಡೆಯುವುದಾಗಿದೆ. ಅದರಿಂದ ಜೀವನದಲ್ಲಿ ನಿರ್ಣಯ (=ನಿರ್ಣಾಯ ಕ) ತೆಗೆದುಕೊಳ್ಳುವ ಸಂದರ್ಭದಲ್ಲಿ ಸಹಾಯ ಸಿಗುವಂತಾಗಬೇಕು. ಜೀವನದ ಒಂದು ಅಥವಾ ಅನೇಕ ಮಗ್ಗುಲುಗಳನ್ನು ಅರ್ಥ ಮಾಡಿಕೊಳ್ಳಲು ಸಹಾಯವಾಗುವಂತೆ ಇರಬೇಕು.

ಸಂವಾದ ಮಾಡುವ ಅನೇಕ ರೀತಿ-ನೀತಿಗಳು ಇರಬಹುದು. ಇದರಲ್ಲಿ ಅನೇಕ ಸಮಸ್ಯೆಗಳಿಗೆ ಸಮಾಧಾನ ಹುಡುಕುವ ಪ್ರಯತ್ನ ಇರಬಹುದು. ನಾನು ಲೇಖನದಲ್ಲಿ ಕೆಲವು ಮೂಲಭೂತ ಮತ್ತು ಮೂರ್ತ ಸ್ತರದ ವಿಷಯಗಳನ್ನು ಹಂಚಿಕೊಳ್ಳುವ ಪ್ರಯತ್ನ ಮಾಡಿದ್ದೇನೆ. ನನ್ನ ಅನಿಸಿಕೆ ಏನೆಂದರೆ ಸಾಕ್ರೆಟಿಸನ ಕಾಲದಿಂದ ಇಂದಿನವರೆಗೆ ಹಿಂದಿನ ಎರಡೂವರೆ ಸಾವಿರ ವರ್ಷಗಳಲ್ಲಿ ಸಂವಾದದ ಮೂಲಭೂತ ಸ್ವರೂಪದಲ್ಲಿ ಯಾವುದೇ ಹೆಚ್ಚಿನ ವ್ಯತ್ಯಾಸವಾಗಿಲ್ಲ. ತಾರ್ಕಿಕ ಪ್ರಶ್ನೆ ಎತ್ತುವುದು ಅದಕ್ಕೆ ಬೇಕಾಬಿಟ್ಟಿ ತೋಚಿದ ಉತ್ತರ ನೀಡುವುದು, ತನ್ನ ಉತ್ತರದಲ್ಲಿ ಕೆಲ ತಾರ್ಕಿಕ ಕೊರತೆಯನ್ನು ಹುಡುಕುವುದು ಮತ್ತೆ ಪುನಃ ಪರಿಷ್ಕೃತ ರೂಪವನ್ನು ಪ್ರಸ್ತುತಪಡಿಸುವುದು ಇವು ಹಾಗೆ ಒಂದೇ ಸಮನೆ ನಡೆಯುವ ಪ್ರಕ್ರಿಯೆಗಳಾಗಿವೆ. ನನಗನ್ನಿಸುವ ಮಟ್ಟಿಗೆ ಇಂದಿನಿಂದ ಎರಡೂವರೆ ಸಾವಿರ ವರ್ಷಗಳ ಹಿಂದೆ ಸಾಕ್ರೆಟಿಸ್ ಎಷ್ಟು ಮಹತ್ವಪೂರ್ಣರಾಗಿದ್ದರು ಸಂವಾದದ ಸಂದರ್ಭದಲ್ಲಿ ಇಂದಿಗೂ ಅವರು ಅಷ್ಟೇ (ಮಹತ್ವಪೂರ್ಣ) ಪ್ರಸ್ತುತರೆನಿಸುತ್ತಾರೆ. ಸಾಕ್ರೆಟೀಸನ ಹೇಳಿಕೆಯ ಪ್ರಕಾರ ಶಿಕ್ಷಕರ ಜವಾಬ್ದಾರಿ ಕೇವಲ ಕೆಲ ವಿಷಯಗಳನ್ನು ಕಲಿಸುವುದು ಅಥವಾ ಬಾಯಿಪಾಠ ಮಾಡಿಸುವ ಮಟ್ಟಿಗೆ ಅಷ್ಟೇ ಅಲ್ಲ ಅದರ ಹೊರತಾಗಿ ಆ ವಿಷಯಗಳ ಬಗ್ಗೆ ಹೇಗೆ ಯೋಚಿಸುತ್ತಾರೆ? ಸಿದ್ಧಾಂತವನ್ನು ಹೇಗೆ ಕಟ್ಟುತ್ತಾರೆ? ಹೊಸ ಜ್ಞಾನವನ್ನು ಹೇಗೆ ಹುಟ್ಟುಹಾಕುತ್ತಾರೆ? ಉದಾಹರಣೆಗೆ ವಿಜ್ಞಾನ ಸಮಾಜವಿಜ್ಞಾನ ಗಣಿತ ಮುಂತಾದವುಗಳಲ್ಲಿ ಹೊಸ ಜ್ಞಾನದ ಹುಟ್ಟು ಹೇಗೆ ಆಗುತ್ತದೆ ಎಂಬುದನ್ನು ಕಲಿಸುವುದು ಕೂಡ ಆಗಿರುತ್ತದೆ.

ವಾಸ್ತವವಾಗಿ ಸಂವಾದ ಮಾಡುವುದು ಎಲ್ಲಾ ಕಲಿಕೆಯ ಆಧಾರಭೂತ ಪ್ರಕ್ರಿಯೆ ಎಂಬುದು ಅವರ ಅಭಿಪ್ರಾಯವಾಗಿತ್ತು. ವಿದ್ಯಾರ್ಥಿಗಳ ಜೊತೆ ಸೇರಿ ತರ್ಕ ಮಾಡುವುದು, ಅವರ ಹತ್ತಿರ ಅವರ ಅನಿಸಿಕೆಗಳನ್ನು ವಿಚಾರ ಪ್ರಪರಿಭಾಷೆಗಳನ್ನು ಕೇಳುವುದು ಮತ್ತು ಅದರಲ್ಲಿನ ತಾರ್ಕಿಕ ತಪ್ಪುಗಳನ್ನು ಅಥವಾ ಕೊರತೆಗಳನ್ನು ತೋರಿಸುವುದು ಹಾಗೂ ಅವುಗಳನ್ನು

ಪರಿಷ್ಕರಿಸುವುದು ಸಂವಾದದ ಮೂಲಭೂತ ಪ್ರಕ್ರಿಯೆಗ ಳಾ ಗಿರುತ್ತವೆ. ಈ ಪ್ರಕ್ರಿಯೆಗಳನ್ನು ಮಾಡುತ್ತಲೇ ವಿದ್ಯಾರ್ಥಿ-ವಿದ್ಯಾರ್ಥಿನಿಯರು ಯಾವ ರೀತಿಯ ಚಿಂತನ ಮನನವನ್ನು ಮಾಡಬೇಕೆಂದು ಕಲಿಯುತ್ತಾರೆ.

ಎಲೆನ್ ಕಸ್ ಸಾಕ್ರೆಟಿಸರ ಪ್ರಿಯವಾದ ಯುಕ್ತಿ ಆಗಿತ್ತು. ಈ ಯುಕ್ತಿಯ ಮುಖಾಂತರ ಹಿರಿಯ ಎದುರಾಳಿಯ ಮಾತನ್ನು ಖಂಡಿಸಲಾಗುತ್ತದೆ. ಕಡೆಗೂ ಯಾಕೆ ಖಂಡಿಸುತ್ತಾರೆ? ಸಾಕ್ರೆಟೀಸ್ ಯುಕ್ತಿಯನ್ನು ಅಪೋರಿಯ ಸ್ಥಿತಿಯನ್ನು ಪಡೆಯಲು ಬಳಸುತ್ತಿದ್ದರು. ಅಪೋರಿಯ ಸ್ಥಿತಿ ಅಂದರೆ ಎದುರಾಳಿಗೆ ಅವನ ಮಾತು ತರ್ಕದಲ್ಲಿ ಅಸಂಗತತೆಯನ್ನು ಅಥವಾ ದೋಷವನ್ನು ತೋರಿಸಲಾಗುತ್ತದೆ. ಅವನು ತನ್ನ ಅಸಂಗತತೆಯನ್ನು ಆ ಸಂದರ್ಭದಲ್ಲಿ ನೋಡಬಲ್ಲ ಇಂಥ ಸ್ಥಿತಿಯೇ ಅಪೋರಿಯ ಎನ್ನುತ್ತಾರೆ.

ಸಾಕ್ರೆಟೀಸನ ಸಂವಾದ ಪ್ರಕ್ರಿಯೆಯಲ್ಲಿ ಸಿಗುವ ಮೂಲಭೂತ ತತ್ವಗಳು ಹೀಗಿವೆ

೧. ಮೊದಲಿಗೆ ಎರಡು ಪಕ್ಷದವರು ಮಾತಾಡಬೇಕಾದ ವಿಷಯವೇನೆಂದು ನಿರ್ಣಯಿಸಬೇಕು. ಆಮೇಲೆ ಎರಡು ಪಕ್ಷಗಳ ಅಭಿಪ್ರಾಯಗಳನ್ನು ಏನೆಂದು ಸ್ಪಷ್ಟಪಡಿಸಿಕೊಳ್ಳಬೇಕು. ಉದಾಹರಣೆಗೆ ಅವರ ಅಭಿಪ್ರಾಯವೇನು? ಪರಿಭಾಷೆ ಅಥವಾ ತರ್ಕವೇನು ? ಮುಂತಾದವುಗಳು.

೨. ಎರಡನೇ ಹಂತದಲ್ಲಿ ಯಾವುದಾದರೂ ಒಂದು ಪಕ್ಷ ಮತ್ತೊಂದು ಪಕ್ಷದ ಅಭಿಪ್ರಾಯದಲ್ಲಿ ಅಸಂಗತತೆಯನ್ನು ತೋರಿಸಬೇಕು ಅದರಿಂದ ಅಪೋರಿಯ ಸ್ಥಿತಿ ಹುಟ್ಟಿಕೊಳ್ಳುತ್ತದೆ.

೩. ಮೂರನೇ ಹಂತದಲ್ಲಿ ಈ ಅಸಂಗತತೆಯನ್ನು ಹೇಗೆ ದೂರಮಾಡುವುದು ಎಂಬುದನ್ನು ಯೋಜಿಸಲಾಗುತ್ತದೆ. ಯಾವುದು ಹೆಚ್ಚಿನ ಪರಿಷ್ಕೃತ ಅಭಿಪ್ರಾಯ ವಾಗಬಹುದು ಎಂಬುದರ ಬಗ್ಗೆ ವಿಚಾರ ಮಾಡಲಾಗುತ್ತದೆ.

ನನಗನ್ನಿಸುವ ಮಟ್ಟಿಗೆ ಈ ಪ್ರಕಾರದ ಕೆಲ ಪ್ರಕ್ರಿಯೆಗಳು ನನ್ನ ಮತ್ತು ಮಕ್ಕಳ ನಡುವೆ ನಡೆಯುತ್ತಾ ಇತ್ತು. ಅದಕ್ಕಾಗಿ ತರಗತಿಯ ಕೊರಡಿಗಳಲ್ಲಿ ಸಂವಾದ ಸಂಸ್ಕೃತಿಗೆ ಮಹತ್ವ ನೀಡಬೇಕೆಂದು ಎತ್ತಿ ಹೇಳುತ್ತಿದ್ದೇನೆ. ಒಂದೊಮ್ಮೆ ಶಿಕ್ಷಕ ಅಥವಾ ಮಗುವಿನ ಮಧ್ಯ ಸಂವಾದ ಸಂಸ್ಕೃತಿ ಆದರೆ ಕೇವಲ ಮಕ್ಕಳ ಕಲಿಕೆಯ ಗತಿ ಅಷ್ಟೇ ಹೆಚ್ಚಾಗುವುದಿಲ್ಲ ಅದರ ಹೊರತಾಗಿ ಮಕ್ಕಳು ಸರಿಯಾದ ತಿಳುವಳಿಕೆ ಪಡೆಯಲು ಪ್ರಶ್ನೆ ಕೇಳುವುದು ಮಾಡುವುದು ಬೇರೆಯವರ ಮಾತನ್ನು ಕೇಳುವುದು ಅವಶ್ಯಕವೆಂದು ಕಲಿಯುವತ್ತ ಮುಂದುವರೆಯುತ್ತಾರೆ.

**ನನ್ನ ಮನಸ್ಸಿನಲ್ಲಿ ಏಳುವ ಪ್ರಶ್ನೆಗಳು**

ರಾಷ್ಟ್ರೀಯ ಪಠ್ಯಕ್ರಮ ೨೦೦೫ರ ಅಂಕಿ-ಅಂಶಗಳ ಪ್ರಕಾರ ಅಧ್ಯಾಪಕರ ಪಾತ್ರವೇನೆಂದರೆ ಅವರು ಮಕ್ಕಳ ಅಭಿವ್ಯಕ್ತಿಗೆ ಸುರಕ್ಷಿತ ಸ್ಥಾನವನ್ನು ಹಾಗೂ ಅವಕಾಶವನ್ನು ಕೊಡಬೇಕು. ಜೊತೆಯಲ್ಲೇ ನಿಶ್ಚಿತವಾದ ಸಂಭಾಷಣೆಯನ್ನು ಮಾಡುವ ಪರಿಪಾಠ ಇಡಬೇಕು. ಅವರು ನೈತಿಕ ಪ್ರಭುತ್ವದ(=ಶಾಸನದ) ಪರಂಪರಾಗತವಾದ ಪಾತ್ರದಿಂದ ಹೊರಬಂದು ಯಾವುದೇ ನಿರ್ಣಯವನ್ನು ತೆಗೆದುಕೊಳ್ಳದೆ ಸಮಾನ ಅನುಭೂತಿಯಿಂದ ಹೇಗೆ ಕೇಳಬೇಕು ಎಂಬುದನ್ನು ಕಲಿಯಬೇಕಾಗಿದೆ . ಮಕ್ಕಳು ಒಬ್ಬರು ಹೇಳಿದ್ದನ್ನು ಮತ್ತೊಬ್ಬರು ಆಲಿಸುವ ಹಾಗೆ (=ಕೇಳಲು) ಸಮರ್ಥರನ್ನಾಗಿಸಬೇಕು.

ವಿದ್ಯಾರ್ಥಿಗಳ ತಿಳುವಳಿಕೆಗಳನ್ನು ಕ್ರೋಡೀಕರಿಸಿ ರಚನಾತ್ಮಕವಾಗಿ ಅದರ ವ್ಯಾಪ್ತಿಯನ್ನು ಹೆಚ್ಚಿಸುತ್ತಾ ಮತಬೇಧ ಅಥವಾ ವಿರೋಧವನ್ನು ಹೇಗೆ ಅಭಿವ್ಯಕ್ತಗೊಳಿಸಬೇಕು ಎಂಬುದರ ಬಗ್ಗೆ ಸಹ ಎಚ್ಚರಿಸಬೇಕು. ಪರಸ್ಪರ ವಿಶ್ವಾಸದ ವಾತಾವರಣ ತರಗತಿಯಲ್ಲಿ ಮಕ್ಕಳಿಗೆ ಒಂದು ಸುರಕ್ಷಿತ ಸ್ಥಾನವನ್ನು ಕಲ್ಪಿಸುತ್ತದೆ. ಅಲ್ಲಿ ಅವರು ತಮ್ಮ ಅನುಭವಗಳನ್ನು ಹಂಚಿಕೊಳ್ಳಲು, ವಿವಾದದ ಸಂದರ್ಭದಲ್ಲಿ ರಚನಾತ್ಮಕ ಪ್ರಶ್ನೆಯನ್ನು ಕೇಳಲು ಅನುಕೂಲ ಮಾಡಿಕೊಡಬೇಕು. ಆ ನಿರ್ಣಯ ತಾತ್ಪೂರ್ತಿಕವಾಗಿ ಆದರೂ ಸರಿ, ವಿವಾದಗಳನ್ನು ಪರಸ್ಪರ ಸಮಿತಿಯಲ್ಲಿ ಬಗೆಹರಿಸಲು ಸಾಧ್ಯವಾಗುತ್ತದೆ. ಶಾಲೆ ಎಂಬುದು ವಿಶೇಷವಾಗಿ ಹುಡುಗಿಯರು ಅಥವಾ ನಿಮ್ನ ವರ್ಗದಿಂದ ಬಂದ ಮಕ್ಕಳಿಗೆ ನಿರ್ಣಯ ತೆಗೆದುಕೊಳ್ಳಲು, ಚರ್ಚೆಯಲ್ಲಿ ಭಾಗವಹಿಸಿ ತಮ್ಮ ನಿರ್ಣಯದ ಆಧಾರದ ಮೇಲೆ ಪ್ರಶ್ನೆ ಕೇಳುವ, ಸರಿಯಾಗಿ ಯೋಚಿಸಿ ಸರಿಯಾದದ್ದನ್ನು ಆಯ್ಕೆ ಮಾಡುವ ಸ್ಥಾನವಾಗಬೇಕು. .

ರಾಷ್ಟ್ರೀಯ ಪಠ್ಯಕ್ರಮ ೨೦೦೫ರ ಅಂಕಿ ಅಂಶದ ಪ್ರಕಾರ ಅಧ್ಯಾಪಕರಿಂದ ಏನನ್ನು ನಿರೀಕ್ಷಿಸಲಾಗುತ್ತದೆ ಎಂಬ ಸಂದರ್ಭದಲ್ಲಿ ಮಕ್ಕಳ ಜೊತೆ ಸಂಭಾಷಣೆ ಮಾಡುವಾಗ ನನ್ನೆದುರಿಗೆ ಕೆಲ ಪ್ರಶ್ನೆಗಳು ಎದ್ದವು. ನನಗನಿಸುವ ಮಟ್ಟಿಗೆ ಒಂದು ಹಂತದಲ್ಲಿ ಶಿಕ್ಷಕರು ಈ ಪ್ರಶ್ನೆಗಳ ಬಗ್ಗೆ ಕೂಡಾ ಯೋಚಿಸುವುದು ಅತ್ಯಂತ ಅವಶ್ಯಕವಾದದ್ದು. ನನಗೆ ತಿಳಿದಂತೆ ಶಿಕ್ಷಕರು ಮಕ್ಕಳ ವ್ಯಾವಹಾರಿಕ ಜ್ಞಾನದ ಬಗ್ಗೆ ಊಹಿಸಿಕೊಂಡು ಬರೀ ಪುಸ್ತಕ ತಿಳುವಳಿಕೆಯ ಮೇಲೆ ಒತ್ತುಕೊಡುತ್ತಾರೆ. ಮಕ್ಕಳು ಬಹಳಷ್ಟು ವಿಷಯದ ಬಗ್ಗೆ ತಪ್ಪು ಅಥವಾ ಅರೆಬರೆ ಗ್ರಹಿಕೆಯಿಂದ ಶಾಲೆಗೆ ಬರುತ್ತಾರೆ. ಒಂದೊಮ್ಮೆ ಅವರಿಗೆ ಗೊತ್ತಿಲ್ಲದೆ ಶಿಕ್ಷಕರು ಅದೇ ವಿಷಯದ ಬಗ್ಗೆ ಹೊಸ ಗ್ರಹಿಕೆಯನ್ನು ಮಕ್ಕಳಲ್ಲಿ ಹುಟ್ಟುಹಾಕುವ ಪ್ರಯತ್ನವನ್ನು ಮಾಡಿದರೆ ಮಕ್ಕಳ ಕಲಿಕೆಯ ಮೇಲೆ ಪ್ರಭಾವ ಬೀರುವುದಿಲ್ಲವೇ?

ಈ ರೀತಿಯ ಪ್ರಶ್ನೆಗಳಲ್ಲಿ ನಾವು (ನಿಸರ್ಗದ= ) ಪರಿಸರ ಶಿಕ್ಷಣದಿಂದ ವಿಜ್ಞಾನದ ಶಿಕ್ಷಕರ ಕಡೆಗೆ ಹೋಗುವ ಸ್ಪಷ್ಟ ಅವಕಾಶವನ್ನು ಹುಡುಕಬಲ್ಲೆವು. ಹೆಚ್ಚಾಗಿ ಶಾಲೆಯ ಕಡೆಯಿಂದ ಪಾಲಕರ ಮೇಲೆ ಜವಾಬ್ದಾರಿ ಹಾಕಲಾಗುತ್ತದೆ ಎಂಬ ಇನ್ನೊಂದು ಪ್ರಶ್ನೆ ಎದ್ದಿತು. ಹೌದು, ಪಾಲಕರು ಸಹ ತಮ್ಮ ಮಕ್ಕಳ ಕಲಿಕೆಯ ಪ್ರಕ್ರಿಯೆಯಲ್ಲಿ ತಮ್ಮ ಪಾತ್ರವನ್ನು ನಿಭಾಯಿಸಬೇಕು ಅಥವಾ ಸ್ವಲ್ಪವಾದರೂ ಈ ಬಗ್ಗೆ ಜಾಗೃತರಾಗಬೇಕು. ಆದರೆ ನಮ್ಮ ದೇಶದಲ್ಲಿ ಬಹಳಷ್ಟು ಮಕ್ಕಳು, ಶಾಲೆಗೆ ಹೋಗುವ ಅವಕಾಶ ಸಿಕ್ಕ ಮೊದಲನೇ ಪೀಳಿಗೆಯವರು. ಈ ಶಾಲೆಯಲ್ಲಿ ಸಹ ಹೆಚ್ಚಿನ ಮಕ್ಕಳು ಕೂಲಿ ಕಾರ್ಮಿಕರ ಕುಟುಂಬದಿಂದ ಬರುವ ಮಕ್ಕಳು. ಕಟ್ಟಡ ಕಾಮಗಾರಿಗೆ ಸಂಬಂಧಿಸಿದ ಕುಟುಂಬದ ಮಕ್ಕಳ ಕೈಲಿ ಈ ಪ್ರಶ್ನೆಗಳ ಬಗ್ಗೆ ಮನೆಯವರಿಂದ ಸಹ ತಿಳುವಳಿಕೆ ಪಡೆದು ಬರಬೇಕೆಂದರೆ ಅದೆಷ್ಟು ಸಮಂಜಸವಾಗುತ್ತದೆ? ನನಗನಿಸಿದ ಇನ್ನೊಂದು ಮಾತು ಏನೆಂದರೆ ಶಿಕ್ಷಕರ ಮತ್ತು ಮಕ್ಕಳ ನಡುವಿನ ಸಂವಾದದ ಮಹತ್ವ. ನಮ್ಮ ಶಾಲೆಯ ತರಗತಿಗಳಲ್ಲಿ ಮಕ್ಕಳಿಗೆ ಅವರವರಲ್ಲೇ ಅಥವಾ ಶಿಕ್ಷಕರ ಜೊತೆ ಸಂವಾದಿಸುವ ಅವಕಾಶವನ್ನು ಏಕೆ ಕೊಡುವುದಿಲ್ಲ ಎಂದು. ತಮ್ಮತಮ್ಮಲ್ಲೇ ಸಂವಾದಗಳನ್ನು ಮಾಡುವುದರಿಂದ ಮಕ್ಕಳಲ್ಲಿ ಸ್ವತಂತ್ರ ಅಭಿವ್ಯಕ್ತಿ ಮತ್ತು ತರ್ಕ ಮಾಡುವ ಶಕ್ತಿ ವಿಕಾಸವಾಗುವುದನ್ನು ನಾನು ನೋಡಿದ್ದೇನೆ. ನಮಗೆ ನಮ್ಮ ಅನುಭವದ ಹೊರತಾಗಿ ಬಹಳಷ್ಟು ವಿಷಯಗಳ ಬಗ್ಗೆ ಚರ್ಚೆ ಮಾಡಿ ತಿಳಿದುಕೊಳ್ಳುವ ಅವಕಾಶವನ್ನುಸಂವಾದ ಒದಗಿಸುತ್ತದೆ. ಶಾಲೆಯಲ್ಲಿ ನಡೆಯುವ ಸಂವಾದ ಮಕ್ಕಳಿಗೆ ಮನೆಯಲ್ಲಾಗುವ ಅನುಭವ ಹಾಗೂ ಅಲ್ಲಿ ಹುಟ್ಟಿಕೊಳ್ಳುವ ಚಿಂತೆಗೆ ಸಂಬಂಧಪಟ್ಟಿದ್ದನ್ನು ಹೇಳಿಕೊಳ್ಳುವ ಅವಕಾಶವನ್ನು ಕೊಡಬಲ್ಲದು . ನಿಸ್ಸಂದೇಹವಾಗಿ ಸಂವಾದ ಸ್ಪಷ್ಟತೆಯನ್ನು ತರುತ್ತದೆ. ಆದರೆ ಸಣ್ಣ ತರಗತಿಗಳಲ್ಲಿ ಸಂವಾದಕ್ಕೂ ಒಂದು ಮಿತಿ ಇದೆ. ಆದ್ದರಿಂದ ಶಿಕ್ಷಕನಿಗೆ ಶಿಕ್ಷಣದ ಮುಖಾಂತರ ಕೆಲ ಬೇರೆ ವಿಷಯಗಳನ್ನು ಅಂದರೆ ಪಠ್ಯಪುಸ್ತಕ, ಚಿತ್ರ, ಸಿನಿಮಾ, ತಿರುಗಾಟದ ಅನುಭವ, ಶೋ ಮುಂತಾದವುಗಳಲ್ಲಿ ತರಬೇಕಾಗುತ್ತದೆ.